ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸೈನಿಕ ಸ್ಮಾರಕ ನಿರ್ಮಿಸುವ ಕುರಿತು

ಶ್ರೀ ಕೆ. ಪ್ರತಾಪ್ ಸಿಂಹ ನಾಯಕ್(ವಿಧಾನ ಸಭೆಯಿಂದ ಚುನಾಯಿತರಾದವರು ) –

518 (656) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸಮರ ಸ್ಮಾರಕ/ಸೈನಿಕ ಸ್ಮಾರಕ/ವಾರ್ ಮೆಮೋರಿಯಲ್ ಸ್ಥಾಪನೆ ಮಾಡುವ ಯೋಚನೆ ಮತ್ತು ಯೋಜನೆ ಸರ್ಕಾರದ ಮುಂದಿದೆಯೇ;

(ಆ) ರಾಜ್ಯದ ಎಷ್ಟು ಜಿಲ್ಲೆಗಳಲ್ಲಿ ಈಗಾಗಲೇ ಸಮರ ಸ್ಮಾರಕ/ಸೈನಿಕ ಸ್ಮಾರಕ/ವಾರ್ ಮೆಮೋರಿಯಲ್ ಸ್ಥಾಪಿಸಲಾಗಿದೆ;

(ಇ) ರಾಜ್ಯದ ಜನತೆಯಲ್ಲಿ ರಾಷ್ಟ್ರಭಕ್ತಿ, ದೇಶಪ್ರೇಮವನ್ನು ಜಾಗೃತಗೊಳಿಸುವ ನಿಟ್ಟಿನಲ್ಲಿ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸಮರ ಸ್ಮಾರಕಗಳನ್ನು ಸ್ಥಾಪಿಸಿ ಜುಲೈ 26ರಂದು ಕಾರ್ಗಿಲ್ ವಿಜಯ ದಿವಸ ಮತ್ತು ಡಿಸೆಂಬರ್ 16 ರಂದು ಬಾಂಗ್ಲಾ ವಿಮೋಚನಾ ಯುದ್ಧದ ಸವಿನೆನಪಿನಲ್ಲಿ ವಿಜಯ ದಿವಸ ಆಚರಿಸಲು ಸರ್ಕಾರ ಕೈಗೊಳ್ಳಲಿರುವ ಕ್ರಮವೇನು?